

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **21(224)**
ಮಾನ್ಯ ಸದಸ್ಯರ ಹೆಸರು : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು.
ಉತ್ತರಿಸಬೇಕಾದ ದಿನಾಂಕ : 13.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯ ಅಧಿನಿಯಮ-2000, ಅನುಸಾರ ವಿಶ್ವವಿದ್ಯಾನಿಲಯದ ಸಿಂಡಿಕೇಟ್‌ಗೆ ಒಬ್ಬ ವ್ಯಕ್ತಿ ಎರಡನೇ ಬಾರಿಗೆ ನಾಮ ನಿರ್ದೇಶನವಾಗಲು ಅರ್ಹತೆ ಹೊಂದಿರುತ್ತಾರೆಯೇ; ಹಾಗಿದ್ದಲ್ಲಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯ ಅಧಿನಿಯಮ-2000ರ ಯಾವ ಪ್ಯಾರ ಪ್ರಕಾರ ಎರಡನೆ ಬಾರಿಗೆ ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರನ್ನು ನೇಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000, ಪ್ರಕರಣ 39(2)ರನ್ವಯ ಯಾವುದೇ ಪ್ರಾಧಿಕಾರಕ್ಕೆ ನಾಮ ನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು, ಎರಡನೇ ಅವಧಿಗಾಗಿ ನಾಮ ನಿರ್ದೇಶಿತನಾಗಲು ಅರ್ಹನಾಗುವುದಿಲ್ಲ.<br><br>ಶ್ರೀ ಪಿ.ಎಂ ರವಿಚಂದ್ರ, ಇವರನ್ನು ಸರ್ಕಾರದ ಪತ್ರ ಸಂಖ್ಯೆ: ಇಡಿ 99 ಯುಡಿವಿ 2011, ದಿನಾಂಕ 15.07.2011ರಲ್ಲಿ ಸಿಂಡಿಕೇಟ್ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದ್ದು, ತದನಂತರ ಸರ್ಕಾರದ ಪತ್ರ ಸಂಖ್ಯೆ: ಇಡಿ 48 ಯುಡಿವಿ 2013, ದಿನಾಂಕ 22.06.2013ರಲ್ಲಿ ಸದರಿಯವರ ನಾಮ ನಿರ್ದೇಶನವನ್ನು ಹಿಂಪಡೆಯಲಾಗಿರುತ್ತದೆ. ಸದರಿಯವರು ಮೊದಲ ಅವಧಿಯಲ್ಲಿ 03 ವರ್ಷಗಳ ಅವಧಿಯನ್ನು ಪೂರೈಸಿರುವುದಿಲ್ಲ.<br><br>ದಿನಾಂಕ 06.07.2020ರಂದು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000, ಪ್ರಕರಣ 28(1)(ಇ)ರನ್ವಯ ಮಾನ್ಯ ರಾಜ್ಯಪಾಲರು ಹಾಗೂ ಕುಲಾಧಿಪತಿಗಳು ಶ್ರೀ ಪಿ.ಎಂ ರವಿಚಂದ್ರ, ಇವರನ್ನು 03 ವರ್ಷಗಳ ಅವಧಿಗೆ ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದ್ದು, ಇದರಲ್ಲಿ ಸರ್ಕಾರದ ಪಾತ್ರವಿರುವುದಿಲ್ಲ. |

| | | |
|---|---|---|
| ಆ) | ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ ಅಧಿನಿಯಮ 2000, ಅನುಸಾರ ವಿಶ್ವವಿದ್ಯಾನಿಲಯದ ಸಿಂಡಿಕೇಟಿಗೆ ಸದಸ್ಯನಾಗಲು ವಿಶ್ವವಿದ್ಯಾನಿಲಯದ ಅಡಿಯಲ್ಲಿ ಸಂಯೋಜಿತ ಕಾಲೇಜುಗಳು ಇರುವ ಸಂಸ್ಥೆಯ ಇತರ ಕಾಲೇಜಿನ ಪ್ರಾಧ್ಯಾಪಕರು ಸಿಂಡಿಕೇಟ್‌ನ ಸದಸ್ಯತ್ವ | ಸಂಯೋಜಿತ ಕಾಲೇಜಿನಲ್ಲಿ ಅಥವಾ ವಿಶ್ವವಿದ್ಯಾನಿಲಯದಲ್ಲಿ ಯಾವುದೇ ಸಾಮರ್ಥ್ಯದಲ್ಲಿ ನಿಯೋಜನೆಯಲ್ಲಿರುವ ಯಾವೊಬ್ಬ ವ್ಯಕ್ತಿಯು ನಾಮನಿರ್ದೇಶನಕ್ಕೆ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000, ಪ್ರಕರಣ 39(5)ರನ್ವಯ ಅರ್ಹರಾಗುವುದಿಲ್ಲ. |
| | ಹೊಂದಬಹುದೇ; ಹಾಗಿದ್ದಲ್ಲಿ ಪಕ್ಷಪಾತವಾಗುವ ಸಂದರ್ಭಗಳು ಬರುವುದಿಲ್ಲವೇ; ಇಂತಹ ಸದಸ್ಯರು ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ನಾಮ ನಿರ್ದೇಶನವಾಗಿದ್ದಾರೆಯೇ; (ಪೂರ್ಣ ವಿವರ ನೀಡುವುದು) | ಮುಂದುವರೆದು, ಮಂಗಳೂರು ವಿಶ್ವವಿದ್ಯಾಲಯದಲ್ಲಿ ಇಂತಹ ಸದಸ್ಯರುಗಳ ನಾಮ ನಿರ್ದೇಶನವಾಗಿರುವುದಿಲ್ಲ.<br><br>ಆದರೆ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000, ಪ್ರಕರಣ 28(ಎಫ್) ರಡಿಯಲ್ಲಿ ಜೇಷ್ಠತೆಗನುಸಾರ ಸರದಿಯ ಮೇಲೆ ಒಂದು ವರ್ಷದ ಅವಧಿಗೆ ಸಂಯೋಜಿತ ಕಾಲೇಜುಗಳ ನಾಲ್ಕು ಪ್ರಾಂಶುಪಾಲರುಗಳು ಕುಲಪತಿಯವರ ನಾಮನಿರ್ದೇಶನದಂತೆ ಸಿಂಡಿಕೇಟ್ ಸದಸ್ಯರಾಗಲು ಅರ್ಹರಾಗಿರುತ್ತಾರೆ. |
| ಇ) | ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ ಅಧಿನಿಯಮ 2000, ಅನುಸಾರ ಸಿಂಡಿಕೇಟ್ ಸದಸ್ಯತ್ವ ಹೊಂದಲು ಪ್ರಾರ 39(4)ರ ಪ್ರಕಾರ ಪದವೀಧರನಾಗಿಬೇಕಲ್ಲವೇ; ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟಿನಲ್ಲಿ ಕಾನೂನು ಅಡಿಯಲ್ಲಿ ಸ್ಥಾಪಿತಗೊಂಡ ಯಾವುದೇ ವಿಶ್ವವಿದ್ಯಾಲಯದ ಪದವೀಧರನಾಗಿರದ ಹೊರತು ಬೇರೆ ವಿದ್ಯಾರ್ಹತೆಯ ಸದಸ್ಯರಿದ್ದಾರೆಯೇ? (ಪೂರ್ಣ ವಿವಿರ ನೀಡುವುದು) | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000, ಪ್ರಕರಣ 39(4)ರನ್ವಯ ಸಿಂಡಿಕೇಟ್ ಸದಸ್ಯತ್ವ ಹೊಂದಲು ಪದವೀಧರನಾಗಿರಬೇಕು.<br><br>ಪ್ರಸ್ತುತ ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟಿನಲ್ಲಿ ಕಾನೂನಿನ ಅಡಿಯಲ್ಲಿ ಸ್ಥಾಪಿತಗೊಂಡ ಯಾವುದೇ ವಿಶ್ವವಿದ್ಯಾಲಯದ ಪದವೀಧರನಾಗಿರದ ಬೇರೆ ವಿದ್ಯಾರ್ಹತೆಯ ಸದಸ್ಯರಿರುವುದಿಲ್ಲ. |

**ಸಂಖ್ಯೆ: ಇಡಿ 27 ಯುಡಿವಿ 2021**

**(ಡಾ. ಅಶ್ವತ್ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ
ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು